## ಕರ್ನಾಟಕ ವಿಧಾನ ಪರಿಷತ್ತು

1. **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 466 (450)
2. **ಸದಸ್ಯರ ಹೆಸರು** : ಶ್ರೀ ಕೆ.ಎ ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)
3. **ಉತ್ತರಿಸಬೇಕಾದ ದಿನಾಂಕ** : 16.12.2021
4. **ಉತ್ತರಿಸುವ ಸಚಿವರು** : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಆರ್ಥಿಕ ಇಲಾಖೆಯು ಹಣ ಭರವಸೆ ಪತ್ರದ ಆಧಾರದ ಮೇಲೆ ಸರ್ಕಾರದ ವಿವಿಧ ಅಭಿವೃದ್ಧಿ ಇಲಾಖೆಗಳಿಗೆ ಪ್ರತಿ ತಿಂಗಳು ಬಿಡುಗಡೆಯಾದ ಹಣವನ್ನು ಸಂಬಂಧಿಸಿದ ಇಲಾಖೆಗಳು ಗುತ್ತಿಗೆದಾರರಿಗೆ ವಿತರಿಸಲು ಪಾಲಿಸಬೇಕಾದ ನಿಯಮಗನ್ನೊಳಗೊಂಡ ಮಾರ್ಗಸೂಚಿಗಳನ್ನು ಹೊರಡಿಸಿರುವುದು ನಿಜವೇ; (ಹಾಗಿದ್ದಲ್ಲಿ; ಸಂಪೂರ್ಣ ಮಾಹಿತಿ ನೀಡುವುದು) | ಆರ್ಥಿಕ ಇಲಾಖೆಯಿಂದ ಆಯವ್ಯಯದಲ್ಲಿ ಒದಗಿಸಿದ ರಾಜ್ಯ ಸರ್ಕಾರದ ಅನುದಾನಕ್ಕೆ ಹಣ ಭರವಸೆ ಪತ್ರಗಳನ್ನು ಬಿಡುಗಡೆ ಮಾಡುವುದನ್ನು ಸರ್ಕಾರದ ಆದೇಶ ಸಂಖ್ಯೆ:FD 03 SOFC 2007, ದಿನಾಂಕ:11.12.2007ರ ಅನುಸಾರ ದಿನಾಂಕ:01.01.2008ರಿಂದ ಜಾರಿಗೆ ಬರುವಂತೆ ಕೈಬಿಡಲಾಗಿರುತ್ತದೆ.<br>ಪ್ರಸಕ್ತ ಆರ್ಥಿಕ ಇಲಾಖೆಯಿಂದ ಆಯವ್ಯಯದಲ್ಲಿ ಅನುದಾನ ನಿಗದಿಪಡಿಸಿ. ಸದರಿ ಅನುದಾನವನ್ನು ಇಲಾಖಾ ಹಂತದಲ್ಲಿ ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯಿಂದ ಕಾಲಕಾಲಕ್ಕೆ ಅಧಿಕಾರ ಪ್ರತ್ಯಾಯೋಜಿಸಲಾಗುತ್ತಿದೆ. |
| ಆ | ಈ ಮಾರ್ಗಸೂಚಿಯಲ್ಲಿರುವ ನಿಯಮಗಳನ್ನು ಮತ್ತು ಆಧಾರತೆಯನ್ನು ನಿರ್ಲಕ್ಷಿಸಿ, ಗುತ್ತಿಗೆದಾರರಿಗೆ ಅಧಿಕಾರಿಗಳು ಮನ್ನೊಸೋ ಇಚ್ಛೆ ಹಣ ಬಿಡುಗಡೆ ಮಾಡಿರುವುದು ಆರ್ಥಿಕ ಇಲಾಖೆಯ ಗಮನಕ್ಕೆ ಬಂದಿದೆಯೇ; | ಅನ್ವಯಿಸುವುದಿಲ್ಲ |
| ಇ | ಹಾಗಿದ್ದಲ್ಲಿ, ಎಷ್ಟು ಪ್ರಕರಣಗಳಲ್ಲಿ ಈ ಬಗ್ಗೆ ತನಿಖೆ ನಡೆಸಲು ಆರ್ಥಿಕ ಇಲಾಖೆಗೆ ಸಂಬಂಧಿಸಿದ ಇಲಾಖಾ ಕಾರ್ಯದರ್ಶಿಗಳಿಗೆ ಮತ್ತು ಮುಖ್ಯಸ್ಥರಿಗೆ ನಿರ್ದೇಶನ ನೀಡಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ |

| | | |
|---|---|---|
| ಈ | ರಾಜ್ಯದಲ್ಲಿ ಗುತ್ತಿಗೆದಾರರ ಸಂಘ ಮಾನ್ಯ ಪ್ರಧಾನ ಮಂತ್ರಿಗಳಿಗೆ ಮತ್ತು ರಾಜ್ಯದ ರಾಜ್ಯಪಾಲರಿಗೆ ನೀಡಿರುವ ಮನವಿಗಳಲ್ಲಿ ಆರ್ಥಿಕ ಇಲಾಖೆಯ ಕೆ.ಟಿ.ಸಿ.ಪಿ. ಕಾಯ್ದೆಯನ್ನು ಉಲ್ಲಂಘಿಸಿ, ಇ-ಪ್ರಕ್ಯೂರ್‌ಮೆಂಟ್ ಪೋರ್ಟಲ್ ಮುಖೇನ ಟೆಂಡರ್ ಕರೆಯಲು ಅವಕಾಶ ನೀಡದೆ, ರಾಜ್ಯದ ಬಹುತೇಕ ಇಲಾಖೆಗಳ ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರ, ಕ್ರೇಡಲ್, ಕರ್ನಾಟಕ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮಗಳಿಗೆ ನೀಡುತ್ತಿದ್ದು, ಕಳಪೆ ಕಾಮಗಾರಿಗಳಿಗೆ ಅವಕಾಶ ನೀಡುವುದಲ್ಲದೆ, ಲಂಚಗುಳಿತನಕ್ಕೆ ಅವಕಾಶ ನೀಡಿರುವುದಾಗಿ ಆರೋಪಿಸಿರುವುದು ನಿಜವೇ; ಹಾಗಿದ್ದಲ್ಲಿ,ಇದನ್ನು ಸರಿಪಡಿಸಲು ಆರ್ಥಿಕ ಇಲಾಖೆ ಕಗೊಂಡಿರುವ ಕ್ರಮಗಳೇನು; | ಎಲ್ಲಾ ಇಲಾಖೆಗಳಡಿ ಸಂಗ್ರಹಣಾ ಪ್ರಾಧಿಕಾರಗಳು ಕಡ್ಡಾಯವಾಗಿ ಎಲ್ಲಾ ಕಾಮಗಾರಿ/ ಸರಕು/ ಸೇವೆಗಳನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಅಧಿನಿಯಮ-1999 ರ ಅನುಸಾರ ಸಂಗ್ರಹಿಸಬೇಕಾಗುತ್ತದೆ. |
| ಉ | ಆರ್ಥಿಕ ಇಲಾಖೆ ಬೃಹತ್ ಇಲಾಖೆಗಳಾದ ನೀರಾವರಿ, ಲೋಕೋಪಯೋಗಿ ಪಂಚಾಯತ್ ರಾಜ್ ನಗರಾಭಿವೃದ್ಧಿ ಇಲಾಖೆಗಳ ಬೃಹತ್ ಮೊತ್ತದ ಟೆಂಡರ್‌ಗಳನ್ನು ಅನುಮೋದಿಸಿ, ತದನಂತರ ಹಣ ಭರವಸೆ ಪತ್ರಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆಯು ಹಿಂಜರಿಯುತ್ತಿರುವುದು ನಿಜವೇ; ಹಾಗಿದ್ದಲ್ಲಿ, ಇದನ್ನು ಸರಿಪಡಿಸಲು ಆರ್ಥಿಕ ಇಲಾಖೆ ಕೈಗೊಂಡಿರುವ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು). | ಉದ್ಭವಿಸುವುದಿಲ್ಲ |

ಸಂಖ್ಯೆ: ಆಇ 93 ಆಕೋ-2/2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ